# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 157 (66)

2) ಸದಸ್ಯರ ಹೆಸರು : ಶ್ರೀ ಎಸ್.ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

3) ಉತ್ತರಿಸುವ ದಿನಾಂಕ : 01-02-2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೆಗ್ಗಡದೇವನ ಕೋಟೆ ತಾಲ್ಲೂಕು, ನುಗು ಜಲಾಶಯದ ಹಿನ್ನೀರಿನಲ್ಲಿರುವ ಹಳೆಹೆಗ್ಗುಡಿಲು ಪುನರ್ ವಸತಿ ಗ್ರಾಮ ಹಾಗೂ ಸುತ್ತಮುತ್ತಲ ಗ್ರಾಮಗಳಲ್ಲಿ ಸತತವಾಗಿ ಕಾಡಾನೆಗಳು ಹಾಗೂ ಕಾಡುಹಂದಿಗಳಿಂದ, ಬೆಳೆ ನಾಶವಾಗಿ ರೈತರಿಗೆ ಬಹಳ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಭಾಗದ ಎಷ್ಟು ಗ್ರಾಮಗಳಲ್ಲಿ ಎಷ್ಟು ಬಾರಿ ಆನೆ ಹಾಗೂ ವನ್ಯಜೀವಿಗಳ ದಾಳಿ ಆಗಿದೆ; ಎಷ್ಟು ರೈತರ ಬೆಳೆ ನಾಶವಾಗಿದೆ; ರೈತರಿಗೆ ಒದಗಿಸಲಾದ ಪರಿಹಾರ ಎಷ್ಟು; (ವಿವರ ಒದಗಿಸುವುದು) | ಹೌದು.<br><br>ಬಂಡೀಪುರ ವಿಭಾಗದ ನುಗು ವಲಯ ವ್ಯಾಪ್ತಿಯ ನುಗು ಜಲಾಶಯದ ಹಿನ್ನೀರಿನಲ್ಲಿರುವ ಹಳೆಹೆಗ್ಗುಡಿಲು ಪುನರ್ ವಸತಿಗ್ರಾಮ ಹಾಗೂ ಸುತ್ತಮುತ್ತಲ ಸುಮಾರು 35 ರಿಂದ 40 ಗ್ರಾಮಗಳಲ್ಲಿ ಕಾಡಾನೆ ಮತ್ತು ಕಾಡುಹಂದಿ ಒಳಗೊಂಡಂತೆ ಇತರೆ ವನ್ಯಪ್ರಾಣಿಗಳಿಂದ ಕಳೆದ ಮೂರು ವರ್ಷಗಳಲ್ಲಿ ಉಂಟಾದ ಹಾನಿ ಪ್ರಕರಣಗಳು ಹಾಗೂ ಪಾವತಿಸಿದ ದಯಾತ್ಮಕಧನದ ವಿವರಗಳು ಈ ಕೆಳಕಂಡಂತಿದೆ; |

| ಕ್ರ.ಸಂ | ಪ್ರಕರಣ | ಸಂಖ್ಯೆ | ಮೊತ್ತ (ರೂ.ಗಳಲ್ಲಿ) |
|---|---|---|---|
| 2018-19 | | | |
| 1 | ಬೆಳೆ ನಷ್ಟ | 127 | 4,58,191.00 |
| 2 | ಸಾಕುಪ್ರಾಣಿ ಹತ್ಯೆ | 20 | 1,66,000.00 |
| 3 | ಮಾನವಗಾಯ | - | - |
| 4 | ಮಾನವ ಪ್ರಾಣ ಹಾನಿ | - | - |
| 5 | ಆಸ್ತಿ ನಷ್ಟ | 9 | 25,200.00 |
| | ಒಟ್ಟು | 156 | 6,49,391.00 |
| 2019-20 | | | |
| 1 | ಬೆಳೆ ನಷ್ಟ | 393 | 14,02,492.00 |
| 2 | ಸಾಕುಪ್ರಾಣಿ ಹತ್ಯೆ | 56 | 4,12,200.00 |
| 3 | ಮಾನವಗಾಯ | 1 | 8,000.00 |
| 4 | ಮಾನವ ಪ್ರಾಣ ಹಾನಿ | 1 | 7,50,000.00 |
| 5 | ಆಸ್ತಿ ನಷ್ಟ | 1 | 2,000.00 |
| | ಒಟ್ಟು | 452 | 25,74,692.00 |
| 2020-21 (28-01-2021 ರಅಂತ್ಯಕ್ಕೆ) | | | |
| 1 | ಬೆಳೆ ನಷ್ಟ | 228 | 7,81,292.00 |
| 2 | ಸಾಕುಪ್ರಾಣಿ ಹತ್ಯೆ | 29 | 2,26,000.00 |
| 3 | ಮಾನವಗಾಯ | 2 | 33,000.00 |
| 4 | ಮಾನವ ಪ್ರಾಣ ಹಾನಿ | - | - |
| 5 | ಆಸ್ತಿ ನಷ್ಟ | 13 | 38,900.00 |
| 6 | ಮಾಸಾಶನ | 1 | 20,000.00 |
| | ಒಟ್ಟು | 273 | 10,99,192.00 |

| | | |
|---|---|---|
| ಆ) | ಈ ಭಾಗದಲ್ಲಿ ಆನೆ ದಾಳಿ ತಡೆಗಟ್ಟಲು ನಿರ್ಮಿಸಿರುವ ಟ್ರೆಂಚ್(ಕಂದಕ)ಗಳಲ್ಲಿ ಹೂಳು ತುಂಬಿರುವುದು ಹಾಗೂ ಅಳವಡಿಸಿರುವ ಸೋಲಾರ್ ಬೇಲಿ ಕಾರ್ಯನಿರ್ವಹಣೆ ಮಾಡದಿರುವುದರಿಂದ ಆನೆಗಳು ಸತತವಾಗಿ ಜಮೀನುಗಳ ಮೇಲೆ ದಾಳಿ ಮಾಡಿ ಬೆಳೆ ನಾಶ ಮಾಡುತ್ತಿರುವುದರಿಂದ ಕಂದಕ ಮತ್ತು ಸೋಲಾರ್ ಬೇಲಿಯನ್ನು ಸೂಕ್ತವಾಗಿ ನಿರ್ವಹಿಸುವ ಮೂಲಕ ಆನೆ ದಾಳಿಯನ್ನು ತಡೆಗಟ್ಟಲು ಕ್ರಮ ತೆಗೆದುಕೊಳ್ಳಲಾಗುವುದೇ; | ಹೌದು,<br><br>ಕಾಡಾನೆ ಒಳಗೊಂಡಂತೆ ಇತರೆ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಬೆಳೆ ನಾಶ ಪ್ರಕರಣಗಳನ್ನು ತಡೆಗಟ್ಟಲು ಸದರಿ ಪ್ರದೇಶದಲ್ಲಿ 34.82 ಕಿ.ಮೀ ಸೋಲಾರ್‌ತಂತಿ ಬೇಲಿ ಹಾಗೂ 24.83 ಕಿ.ಮೀ ಆನೆ ನಿರೋಧಕ ಕಂದಕವನ್ನು ಈಗಾಗಲೇ ನಿರ್ಮಿಸಿ, ಅದರ ನಿರ್ವಹಣೆ ಮಾಡಲು ಸೂಕ್ತ ಕ್ರಮ ಕೈಗೊಳ್ಳಲಾಗಿದೆ. |
| ಇ) | ನಂಜನಗೂಡು ತಾಲ್ಲೂಕು, ಕಸುವಿನಹಳ್ಳಿ, ಮಾಕನಪುರ, ದೇಪಗೌಡನಪುರ, ಮಲ್ಲಹಳ್ಳಿ, ಕೆಲ್ಲೂರುಪುರ, ಸಿದ್ದಯ್ಯನಹುಂಡಿ ಮುಂತಾದ ಗ್ರಾಮಗಳಲ್ಲಿ ಕಾಡಾನೆಗಳು ರೈತರ ಜಮೀನುಗಳಲ್ಲಿ ಬೆಳೆದಿರುವ ಬೆಳೆಯನ್ನು ನಾಶಪಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಭಾಗದ ಎಷ್ಟು ಗ್ರಾಮಗಳಲ್ಲಿ ಎಷ್ಟು ಬಾರಿ ಆನೆ ಹಾಗೂ ವನ್ಯಜೀವಿಗಳ ದಾಳಿ ಆಗಿದೆ ಹಾಗೂ ರೈತರ ಬೆಳೆ ನಾಶವಾಗಿದೆ, ರೈತರಿಗೆ ಒದಗಿಸಲಾದ ಪರಿಹಾರ ಎಷ್ಟು? (ವಿವರ ಒದಗಿಸುವುದು) | ಹೌದು.<br>ಮೈಸೂರು ವಿಭಾಗ ವ್ಯಾಪ್ತಿಯ ನಂಜನಗೂಡು ವಲಯದ ಕಸುವಿನಹಳ್ಳಿ, ಮಾಕನಪುರ, ದೇಪಗೌಡನಪುರ, ಮಲ್ಲಹಳ್ಳಿ, ಕೆಲ್ಲೂರುಪುರ, ಸಿದ್ದಯ್ಯನಹುಂಡಿ ಸುತ್ತಮುತ್ತಲಿನ ಗ್ರಾಮಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ಕಾಡಾನೆ ಒಳಗೊಂಡಂತೆ ಇತರೆ ವನ್ಯಪ್ರಾಣಿಗಳಿಂದ ಉಂಟಾದ ಹಾನಿ ಪ್ರಕರಣ ಹಾಗೂ ಪಾವತಿಸಿದ ದಯಾತ್ಮಕಧನದ ವಿವರಗಳು ಈ ಕೆಳಕಂಡಂತಿದೆ; |

| ಕ್ರ ಸಂ | ಪ್ರಕರಣ | ಸಂಖ್ಯೆ | ಮೊತ್ತ (ರೂ.ಗಳಲ್ಲಿ) |
|---|---|---|---|
| 2018–19 | | | |
| 1 | ಬೆಳೆ ನಷ್ಟ | 93 | 3,31,578.00 |
| 2 | ಸಾಕುಪ್ರಾಣಿ ಹತ್ಯೆ | 33 | 2,43,300.00 |
| 3 | ಮಾನವಗಾಯ | – | – |
| 4 | ಮಾನವ ಪ್ರಾಣ ಹಾನಿ | – | – |
| 5 | ಆಸ್ತಿ ನಷ್ಟ | – | – |
| | ಒಟ್ಟು | 126 | 5,74,878.00 |
| 2019–20 | | | |
| 1 | ಬೆಳೆ ನಷ್ಟ | 156 | 4,72,993.00 |
| 2 | ಸಾಕುಪ್ರಾಣಿ ಹತ್ಯೆ | 10 | 47,000.00 |
| 3 | ಮಾನವಗಾಯ | 5 | 1,11,200.00 |
| 4 | ಮಾನವ ಪ್ರಾಣ ಹಾನಿ | – | – |
| 5 | ಆಸ್ತಿ ನಷ್ಟ | – | – |
| | ಒಟ್ಟು | 171 | 6,31,193.00 |
| 2020–21 (28–01–2021 ರಅಂತ್ಯಕ್ಕೆ) | | | |
| 1 | ಬೆಳೆ ನಷ್ಟ | 270 | 7,62,868.00 |
| 2 | ಸಾಕುಪ್ರಾಣಿ ಹತ್ಯೆ | 17 | 1,18,500.00 |
| 3 | ಮಾನವಗಾಯ | – | – |
| 4 | ಮಾನವ ಪ್ರಾಣ ಹಾನಿ | – | – |
| 5 | ಆಸ್ತಿ ನಷ್ಟ | 2 | 5,500.00 |
| 6 | ಮಾಸಾಶನ | – | – |
| | ಒಟ್ಟು | 289 | 8,86,868.00 |

ಸಂಖ್ಯೆ: ಅಪಜೀ 13 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು